# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1023 |
| **ಸದಸ್ಯರ ಹೆಸರು** | ಶ್ರೀ ಯು.ಬಿ ವೆಂಕಟೇಶ್<br>(ನಾಮನಿರ್ದೇಶನ ಹೊಂದಿದವರು) |
| **ಉತ್ತರಿಸಬೇಕಾದ ದಿನಾಂಕ** | 21.09.2021 |
| **ಉತ್ತರಿಸಬೇಕಾದ ಸಚಿವರು** | ಮಾನ್ಯ ಉನ್ನತ ಶಿಕ್ಷಣ, ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ & ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |
| **ಪ್ರಶ್ನೆ** | **ಉತ್ತರ** |
| ಅ) ಸ್ಟಾರ್ಟ್‌ಅಪ್ ಕಾರ್ಯಕ್ರಮದ ಉದ್ದೇಶವೇನು? | ಕರ್ನಾಟಕದಲ್ಲಿ ಸ್ಟಾರ್ಟ್‌ಅಪ್ ಕಾರ್ಯಕ್ರಮದ ಉದ್ದೇಶಗಳು ಈ ಕೆಳಕಂಡಂತಿದೆ:-<br>• ಕರ್ನಾಟಕದಲ್ಲಿ ಉತ್ಪದನಾ ಸ್ಟಾರ್ಟ್‌ಅಪ್‌ಗಳನ್ನು ಒಳಗೊಂಡಂತೆ ತಂತ್ರಜ್ಞಾನ ಆಧಾರಿತ ಸ್ಟಾರ್ಟ್‌ಅಪ್‌ಗಳ ಬೆಳವಣಿಗೆಗೆ ಉತ್ತೇಜಿಸುವುದು.<br>• ಸ್ಟಾರ್ಟ್‌ಅಪ್ ವಲಯದಲ್ಲಿ ಹೆಚ್ಚಿನ ಉದ್ಯೋಗಾವಕಾಶಗಳನ್ನು ಸೃಜಿಸಲು ಕ್ರಮ ವಹಿಸುವುದು.<br>• ಆರೋಗ್ಯ ಪಾಲನೆ, ಆಹಾರ ಭದ್ರತೆ, ಶುದ್ಧ ಪರಿಸರ ಹಾಗೂ ಎಲ್ಲರಿಗೂ ಶಿಕ್ಷಣ ಇತ್ಯಾದಿ ವಲಯಗಳಲ್ಲಿ ಸಾಮಾಜಿಕ ಪರಿಣಾಮವಿರುವ ನಾವೀನ್ಯತಾ ತಂತ್ರಜ್ಞಾನ ಪರಿಹಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವುದು.<br>• ಸ್ಟಾರ್ಟ್‌ಅಪ್‌ಗಳಲ್ಲಿರುವ ನ್ಯೂನ್ಯತೆಗಳನ್ನು ಗುರುತಿಸಿ, ಅಗತ್ಯವಾದ ಮಾರ್ಗದರ್ಶನ, ಜ್ಞಾನ ಮತ್ತು ಸಂಪರ್ಕ ಜಾಲವನ್ನು ಸ್ಪಷ್ಟ ರೂಪುರೇಷೆಯೊಂದಿಗೆ ಒದಗಿಸುವ ಮೂಲಕ ಅಂತಹ ಸ್ಟಾರ್ಟ್‌ಅಪ್ ಗಳಿಗೆ ವಾಣಿಜ್ಯೋದ್ಯಮದ ಪ್ರಾರಂಭಿಕ ಹಂತದಲ್ಲಿಯೇ ಒತ್ತು ನೀಡುವುದು.<br>• ಸ್ಟಾರ್ಟ್‌ಅಪ್ ಕಾರ್ಯಕ್ರಮದಲ್ಲಿ ಮುಖಾಮುಖಿ ಮಾರ್ಗದರ್ಶನ ಗೋಷ್ಠಿಗಳು, ಕಮ್ಮಟಗಳು, ತರಬೇತಿ ಕಾರ್ಯಕ್ರಮಗಳು, ವಿಚಾರ ಸಂಕೀರ್ಣಗಳು, ಸಂಪರ್ಕ ಜಾಲ ಸಮಾವೇಶಗಳು, ಅಂತರಾಷ್ಟ್ರೀಯ ಪಾಲುದಾರಿಕೆ ಸಭೆಗಳು, ಹೊರ ವಲಯ ಸೌಕರ್ಯ ಒದಗಿಸುವಿಕೆ, ಬೂಟ್ ಕ್ಯಾಂಪ್‌ಗಳು ಮತ್ತು ಹೂಡಿಕೆದಾರರ ಸಮಾವೇಶಗಳನ್ನು ಆಯೋಜಿಸುವುದು ಇತ್ಯಾದಿ ಅನುಕೂಲ ಕಲ್ಪಿಸುವುದು.<br>• ಸ್ಟಾರ್ಟ್‌ಅಪ್‌ನ ಅಗತ್ಯತೆಗನುಗುಣವಾಗಿ ಸಲಹೆಗಾರರನ್ನು ಗುರುತಿಸಿ ಸದರಿ ಸಲಹೆಗಾರರು ಹಾಗೂ ಸ್ಟಾರ್ಟ್‌ಅಪ್‌ಗಳೊಂದಿಗೆ ಪರಿಚಯ ಮತ್ತು ಚರ್ಚೆ ಏರ್ಪಡಿಸುವುದು. |
| ಆ) ಕಳೆದ ಮೂರು ವರ್ಷಗಳಲ್ಲಿ ಈ ಕಾರ್ಯಕ್ರಮದ ಅಡಿಯಲ್ಲಿ ವ್ಯಾಪಾರಿಗಳು ಮತ್ತು ಉದ್ಯಮಿಗಳಿಗೆ ಧನ ಸಹಾಯ ಮತ್ತು ಪ್ರೋತ್ಸಾಹವನ್ನು ಒದಗಿಸಲಾಗಿದೆಯೇ; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಈ ಕಾರ್ಯಕ್ರಮದ ಅಡಿಯಲ್ಲಿ ಸುಮಾರು 311 ನವೋದ್ಯಮಿಗಳಿಗೆ ಧನ ಸಹಾಯವನ್ನು ಒದಗಿಸುವ ಸಲುವಾಗಿ ರೂ.7,480.00 ಲಕ್ಷಗಳನ್ನು ಮೀಸಲಿರಿಸಿದ್ದು, ಸದರಿ ಮೊತ್ತದಲ್ಲಿ ಈಗಾಗಲೇ ರೂ.5655.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಜಿಲ್ಲಾವಾರು ಮಾಹಿತಿಯನ್ನು **<u>ಅನುಬಂಧ</u>** ದಲ್ಲಿರಿಸಿದೆ. |
| ಇ) ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಸೃಷ್ಟಿಯಾದ ಉದ್ಯೋಗಾವಕಾಶಗಳ ಪ್ರಮಾಣವೆಷ್ಟು? | ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ಧನಸಹಾಯ ಒದಗಿಸಿದ ಸ್ಟಾರ್ಟ್ ಅಪ್‌ಗಳಲ್ಲಿ ಸುಮಾರು 1,149 ಖಾಯಂ ಉದ್ಯೋಗಿಗಳು ಹಾಗೂ 531 ಅರೆಕಾಲಿಕ ಉದ್ಯೋಗಿಗಳು ಸೇರಿ, ಒಟ್ಟಾರೆಯಾಗಿ ಈ ವಲಯದಲ್ಲಿ ಅಂದಾಜು 1,680 ಉದ್ಯೋಗಾವಕಾಶಗಳು ಸೃಷ್ಟಿಯಾಗಿರುತ್ತವೆ. |

**(ಐಟಿಬಿಟಿ 61 ಎಲ್‌ಸಿಎಂ 2021)**

**(ಡಾ॥ ಅಶ್ವಥ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಮತ್ತು ವಿಜ್ಞಾನ & ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

# ಅನುಬಂಧ

## ಕಳೆದ ಮೂರು ವರ್ಷಗಳಲ್ಲಿ ಸ್ಟಾರ್ಟ್ ಅಪ್ ಕಾರ್ಯಕ್ರಮದಡಿಯಲ್ಲಿ ನವೋದ್ಯಮಿಗಳಿಗೆ ಒದಗಿಸಿದ ಧನ ಸಹಾಯದ ವಿವರ

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಜಿಲ್ಲೆ | ಸ್ಟಾರ್ಟ್‌ಅಪ್ ಸಂಖ್ಯೆ | ನಿಗದಿಪಡಿಸಿದ ಅನುದಾನ | ಇಂದಿನವರೆಗೆ ಬಿಡುಗಡೆಯಾದ ಅನುದಾನ |
|---|---|---|---|---|
| 1 | ಬಾಗಲಕೋಟೆ | 1 | 10.00 | 10.00 |
| 2 | ಬೆಳಗಾವಿ | 4 | 90.00 | 45.00 |
| 3 | ಬಳ್ಳಾರಿ | 2 | 35.00 | 17.50 |
| 4 | ಬೆಂಗಳೂರು | 217 | 5350.00 | 4103.00 |
| 5 | ಬೆಂಗಳೂರು ಗ್ರಾಮಾಂತರ | 10 | 270.00 | 247.50 |
| 6 | ಬೀದರ್ | 4 | 65.00 | 42.50 |
| 7 | ಬಿಜಾಪುರ | 2 | 35.00 | 35.00 |
| 8 | ಚಿಕ್ಕಬಳ್ಳಾಪುರ | 1 | 15.00 | 7.50 |
| 9 | ಚಿಕ್ಕ ಮಗಳೂರು | 1 | 30.00 | 15.00 |
| 10 | ದಕ್ಷಿಣ ಕನ್ನಡ | 6 | 175.00 | 101.50 |
| 11 | ದಾವಣಗೆರೆ | 1 | 40.00 | 39.00 |
| 12 | ಧಾರವಾಡ | 23 | 541.00 | 351.50 |
| 13 | ಹಾವೇರಿ | 1 | 15.00 | 7.50 |
| 14 | ಹುಬ್ಬಳ್ಳಿ | 5 | 126.00 | 115.00 |
| 15 | ಕಲ್ಬುರ್ಗಿ | 9 | 111.00 | 81.00 |
| 16 | ಕಾರವಾರ | 1 | 15.00 | 15.00 |
| 17 | ಮಂಡ್ಯ | 1 | 35.00 | 34.00 |
| 18 | ಮೈಸೂರು | 7 | 155.00 | 117.50 |
| 19 | ರಾಯಚೂರು | 2 | 35.00 | 22.50 |
| 20 | ರಾಮನಗರ | 1 | 30.00 | 15.00 |
| 21 | ತುಮಕೂರು | 4 | 85.00 | 65.50 |
| 22 | ಉಡುಪಿ | 6 | 167.00 | 142.50 |
| 23 | ಉತ್ತರ ಕನ್ನಡ | 2 | 50.00 | 25.00 |
| **ಒಟ್ಟು** | | **311** | **7480.00** | **5655.50** |